

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 3009 (2523)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು: ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ವಿಷಯ : ಮೀನುಗಾರಿಕೆ ಇಲಾಖೆಯ ವೃಂದ ಮತ್ತು ನಿಯಮಗಳ ಬಗ್ಗೆ

(ಅ) ಮೀನುಗಾರಿಕೆ ಇಲಾಖೆಯಲ್ಲಿ ಮಂಜೂರಾದ ಭರ್ತಿಯಾದ ಹಾಗೂ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು ; (ವಿವರ ನೀಡುವುದು)

(ಆ) ಹೊರಗುತ್ತಿಗೆ ಮೂಲಕ ನೇಮಕ ಮಾಡಿಕೊಳ್ಳಲಾಗಿದೆಯೇ; ಹಾಗಿದ್ದಲ್ಲಿ, ಯಾವ ಕಛೇರಿಗಳಲ್ಲಿ ಯಾವ ಏಜೆನ್ಸಿಗಳ ಮೂಲಕ ನೇಮಕ ಮಾಡಿಕೊಳ್ಳಲಾಗಿದೆ; ಹಾಗೂ ಅವರುಗಳಿಗೆ ಪಾವತಿಸುತ್ತಿರುವ ವೇತನ ಎಷ್ಟು ; (ವಿವರವಾದ ಮಾಹಿತಿ ನೀಡುವುದು)

(ಇ) ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮವನ್ನು ಯಾವಾಗ ರೂಪಿಸಲಾಗಿದೆ ಪ್ರತಿ 3 ವರ್ಷಕ್ಕೊಮ್ಮೆ ನಿಯಮಗಳನ್ನು ಪರಿಷ್ಕರಿಸುವಂತೆ ಸರ್ಕಾರದ ಆದೇಶ ಇದ್ದರೂ ಸಹ, ಪ್ರಚಲಿತ ಅವಶ್ಯಕತೆಗೆ ಅನುಗುಣವಾಗಿ ತಿದ್ದುಪಡಿ ಮಾಡದಿರುವುದಕ್ಕೆ ಕಾರಣವೇನು ;

(ಈ) ಯಾವ ಕಾಲಮಿತಿಯೊಳಗೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಷ್ಕರಿಸಲಾಗುವುದು ;

(ಉ) ಎಲ್ಲಾ ಇಲಾಖೆಗಳಲ್ಲಿ ತಾಲ್ಲೂಕು ಕಛೇರಿಗಳಲ್ಲಿ ಲಿಪಿಕ/ಡಾಟಾ ಅಪರೇಟರ್ ನೌಕರರಿದ್ದು, ಇಲಾಖೆಯಲ್ಲಿ ಈ ರೀತಿಯಾಗಿ ಯಾವುದೇ ಸಿಬ್ಬಂದಿಯ ಹುದ್ದೆಗಳನ್ನು ಸೃಜಿಸಲು/ಉನ್ನತಿಕರಿಸದಿರಲು ಕಾರಣವೇನು; ಈ ಬಗ್ಗೆ ಸರ್ಕಾರದ ನಿಲುವೇನು ?